# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3 (48) |
| ಮಾನ್ಯ ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 21-09-2020 |
| ಉತ್ತರಿಸಬೇಕಾದ ಸಚಿವರು | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ಬೀದರ್ ನಗರದ ಬ್ರೀಮ್ಸ್ ಕಾಲೇಜಿನಲ್ಲಿ ನಡೆದಿದೆ ಎನ್ನಲಾದ 18 ಕೋಟಿ ರೂಪಾಯಿಯ ಅವ್ಯವಹಾರದ ತನಿಖೆ ಯಾವ ಹಂತದಲ್ಲಿದೆ; (ವಿವರ ನೀಡುವುದು) | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಿದರ್ ಇಲ್ಲಿ ಖರೀದಿ, ಸಿಬ್ಬಂದಿ ನೇಮಕ ಮತ್ತು ಇತರೆ ಕಾಮಗಾರಿ/ಖರೀದಿಗಳಲ್ಲಿ ಹಣದ ದುರುಪಯೋಗ ಹಾಗೂ ಅವ್ಯವಹಾರ ನಡೆದಿರುವುದಾಗಿ ಭ್ರಷ್ಟಾಚಾರ ನಿಗ್ರಹದಳದಿಂದ ಸರ್ಕಾರದಲ್ಲಿ ಸ್ವೀಕೃತವಾದ ವರದಿಯನ್ವಯ ಸರ್ಕಾರದ ಆದೇಶ ಸಂಖ್ಯೆ:ಆಕುಕ 122 ಎಂಎಸ್ಎಫ್ 2018, ದಿನಾಂಕ:29-06-2018 ರಲ್ಲಿ ಈ ಕೆಳಕಂಡ ಸಿಬ್ಬಂದಿಗಳ ವಿರುದ್ಧ ಮೊಕದ್ದಮೆ ದಾಖಲಿಸಿ ತನಿಖೆ ಕೈಗೊಳ್ಳಲು ಭ್ರಷ್ಟಾಚಾರ ನಿಗ್ರಹದಳಕ್ಕೆ ಅಭಿಯೋಜನಾ ಮಂಜೂರಾತಿ ನೀಡಲಾಗಿರುತ್ತದೆ.<br>1. ಡಾ:ಚನ್ನಣ್ಣ ಸಿ, ಹಿಂದಿನ ನಿರ್ದೇಶಕರು,<br>2. ಡಾ: ಶಿವಕುಮಾರ್ ಶೆಟಕಾರ, ಹಿಂದಿನ ವೈದ್ಯಕೀಯ ಅಧೀಕ್ಷಕರು .<br>3. ಶ್ರೀ ಆನಂದಸಾಗರ ರೆಡ್ಡಿ, ಹಿಂದಿನ ಸಿ.ಇ.ಓ.<br>4.ಶ್ರೀಮತಿ ಅನುಷಯಾ, ಸಹಾಯಕ ಆಡಳಿತಾಧಿಕಾರಿಗಳು<br>5. ಶ್ರೀ ಬಾಬು ಕೋಟೆ, ಕಛೇರಿ ಅಧೀಕ್ಷಕರು.<br>6. ಶ್ರೀ ಪ್ರಕಾಶ ಶರಣಪ್ಪ ಮಡಿವಾಳ, ಕಛೇರಿ ಅಧೀಕ್ಷಕರು<br>7. ಶ್ರೀ ಪ್ರಕಾಶ ಮಾಳಗೆ, ಪ್ರ.ದ.ಸ<br>8. ಶ್ರೀಮತಿ ವರ್ಷ ದೇಶಮುಖ್,ಪ್ರ.ದ.ಸ<br>9. ಶ್ರೀ ಮಾಚೆ ಕಲ್ಲಪ್ಪ, ನಿವೃತ್ತ ಕಛೇರಿ ಅಧೀಕ್ಷಕರು (ಮೃತ ಪಟ್ಟಿರುತ್ತಾರೆ)<br>10. ಶ್ರೀ ಶಿವಾಜಿ, ದ್ವಿ.ದ.ಸ. (ಹೊರಗುತ್ತಿಗೆ ನೌಕರರು)<br>ಅಭಿಯೋಜನಾ ಆದೇಶಕ್ಕೆ ಸಂಬಂಧಿಸಿದಂತೆ ಆರೋಪಿತರು ಮಾನ್ಯ ಕರ್ನಾಟ ಉಚ್ಚನ್ಯಾಯಾಲಯ, ಬೆಂಗಳೂರು ಮತ್ತು ಕಲಬುರಗಿ ಪೀಠದಲ್ಲಿ ನ್ಯಾಯಾಲಯ ಪ್ರಕಣಗಳನ್ನು ದಾಖಲಿಸಿದ್ದು, [WP No: 28544-28545/2018 ರಲ್ಲಿ ಡಾ: ಚನ್ನಣ್ಣ ಚಿ & ಡಾ: ಶಿವಕುಮಾರ್ ಶೆಟಕಾರ್, W.P.No:29892-29895/2018 ರಲ್ಲಿ ಶ್ರೀ ಪ್ರಕಾಶ ಮಾಳಗೆ, ಶ್ರೀ ಮಾಚಾಕಲ್ಲಪ್ಪ, ಶ್ರೀ ಬಾಬು ಕೋಟೆ & ಶ್ರೀ ಪ್ರಕಾಶ ಮಡಿವಾಳ, W.P. No:38416/2018 ರಲ್ಲಿ ಶ್ರೀ ಆನಂದಸಾಗರರೆಡ್ಡಿ, WP No: 1613/2019 ರಲ್ಲಿ ಶ್ರೀಮತಿ ವರ್ಷ ದೇಶಮುಖ್] ಮಾನ್ಯ ನ್ಯಾಯಾಲಯವು ಅಭಿಯೋಜನಾ ಆದೇಶಕ್ಕೆ ತಡೆಯಾಜ್ಞೆಯನ್ನು ನೀಡಿರುತ್ತದೆ. |
| (ಆ) | ಬ್ರೀಮ್ಸ್ ನಲ್ಲಿ ನಡೆದ ಅವ್ಯವಹಾರಕ್ಕೆ ಕಾರಣರಾದವರು ಎನ್ನಲಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ನಿಯೋಜನೆ ಮೇಲೆ ಬಂದಿರುವ ಗುಮಾಸ್ತರನ್ನು ಅದೇ ಸ್ಥಳದಲ್ಲಿ ಮುಂದುವರೆಸಿರುವುದರ ಬಗ್ಗೆ ಸರ್ಕಾರದ ಉದ್ದೇಶವೇನು; ಅವರನ್ನು ಮೂಲ ಇಲಾಖೆಗೆ ಕಳುಹಿಸದೇ ಇರುವುದಕ್ಕೆ ಕಾರಣವೇನು; (ವಿವರ ನೀಡುವುದು) | ಬ್ರೀಮ್ಸ್ ನಲ್ಲಿ ನಡೆದ ಅವ್ಯವಹಾರಕ್ಕೆ ಕಾರಣರಾದವರು ಎನ್ನಲಾದ ಅಧಿಕಾರಿ/ನೌಕರರುಗಳ ಪೈಕಿ, ಈ ಕೆಳಕಂಡ ನೌಕರರುಗಳು ಮೂಲತಃ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನೌಕರರಾಗಿದ್ದು ಇವರುಗಳನ್ನು ಮಾತೃ ಇಲಾಖೆಗೆ ಹಿಂದಿರುಗಿಸಿ ಆದೇಶಿಸಲಾಗಿದೆ.<br>ಕ್ರ.ಸಂ / ಸಿಬ್ಬಂದಿ ಹೆಸರು / ಪದನಾಮ<br>1 / ಶ್ರೀಮತಿ ಅನುಷಯಾ / ಸಹಾಯಕ ಆಡಳಿತಾಧಿಕಾರಿ<br>2 / ಶ್ರೀ ಪ್ರಕಾಶ ಶರಣಪ್ಪ ಮಡಿವಾಳ / ಕಛೇರಿ ಅಧೀಕ್ಷಕರು<br>3 / ಶ್ರೀ ಬಾಬು ಕೋಟೆ / ಕಛೇರಿ ಅಧೀಕ್ಷಕರು<br>4 / ಶ್ರೀ ಪ್ರಕಾಶ ಮಾಳಗೆ / ಪ್ರಥಮ ದರ್ಜೆ ಸಹಾಯಕರು |

<table>
<tr>
<td></td>
<td></td>
<td>ಈ ಪೈಕಿ, ಶ್ರೀ ಪ್ರಕಾಶ ಶರಣಪ್ಪ ಮಡಿವಾಳ ಮತ್ತು ಶ್ರೀ ಪ್ರಕಾಶ ಮಾಳಗೆ ಇವರುಗಳು ಸದರಿ ವರ್ಗಾವಣೆ ಆದೇಶಕ್ಕೆ ಮಾನ್ಯ ಉಚ್ಚ ನ್ಯಾಯಾಲಯ, ಕಲಬುರ್ಗಿ ಪೀಠ ಇಲ್ಲಿ ರಿಟ್ ಪಿಟೀಷನ್ ಸಂ: 205160-61/2018ರ ಪ್ರಕರಣಗಳನ್ನು ದಾಖಲಿಸಿ, ತಡೆಯಾಜ್ಞೆಯನ್ನು ತಂದಿರುವುದರಿಂದ, ಸಂಸ್ಥೆಯ ಕರ್ತವ್ಯದಲ್ಲಿ ಮುಂದುವರೆದಿರುತ್ತಾರೆ. ಮಾನ್ಯ ನ್ಯಾಯಾಲಯವು ನೀಡಿರುವ ತಡೆಯಾಜ್ಞೆಯನ್ನು ತೆರವುಗೊಳಿಸಲು ಕ್ರಮಕೈಗೊಳ್ಳಲಾಗುತ್ತಿದೆ.<br><br>ಈ ಹಿನ್ನಲೆಯಲ್ಲಿ, ಶ್ರೀ ಪ್ರಕಾಶ ಶರಣಪ್ಪ ಮಡಿವಾಳ ಮತ್ತು ಶ್ರೀ ಪ್ರಕಾಶ ಮಾಳಗೆ ಅವರುಗಳ ಕಾರ್ಯನಿರ್ವಹಿಸುತ್ತಿದ್ದ ಶಾಖೆಯಿಂದ ಹಣಕಾಸಿನ ವ್ಯವಹಾರವಿಲ್ಲದ ಶಾಖೆಗಳಿಗೆ ಆಂತರಿಕ ಬದಲಾವಣೆ ಮಾಡಲಾಗಿರುತ್ತದೆ.</td>
</tr>
<tr>
<td>(ಇ)</td>
<td>ಕಳೆದ ಅಧಿವೇಶನದಲ್ಲಿ ತನಿಖೆ ನಡೆಸುವುದಾಗಿ ಸರ್ಕಾರ ಭರವಸೆ ನೀಡಿದ್ದು, ಇಲ್ಲಿಯವರೆಗೆ ತನಿಖೆ ಆರಂಭಿಸದೇ ಇರುವುದಕ್ಕೆ ಕಾರಣವೇನು; ಇದರಲ್ಲಿ ಸರ್ಕಾರದ ಪಾತ್ರವಿದೆಯೇ?</td>
<td>ಶ್ರೀ ನಿಶ್ಚಿತ್ ವಿ.ಡಿ. ಆರ್ಥಿಕ ಸಲಹೆಗಾರರು, ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು ಇವರನ್ನು ದಿನಾಂಕ: 19/02/2018ನ ರಂದು ಬ್ರಿಮ್ಸ್ ಸಂಸ್ಥೆಯಲ್ಲಿ ಲಿಪಿಕ ಸಿಬ್ಬಂದಿಗಳಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಪ್ರಕಾಶ ಎಸ್, ಮತ್ತು ಶ್ರೀ ಪ್ರಕಾಶ ಮಾಳಗೆ ರವರು ಮಾಡಿರುವ ಅವ್ಯವಹಾರದ ಬಗ್ಗೆ ತನಿಖೆ ಕೈಗೊಳ್ಳಲು ಆದೇಶಿಸಿದ್ದು, ಸದರಿ ತನಿಖಾಧಿಕಾರಿಯು ತನಿಖೆ ಕೈಗೊಂಡು ದಿನಾಂಕ: 19/06/2018 ರಂದು ಸರ್ಕಾರಕ್ಕೆ ತನಿಖಾ ವರದಿ ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಿ ಸರ್ಕಾರವು ದಿನಾಂಕ: 04/08/2018 ರಂದು ಈ ಕೆಳಕಂಡ ಆರೋಪಿತ ಅಧಿಕಾರಿ/ನೌಕರರಿಗೆ ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಗಿರುತ್ತದೆ.
<table>
<tr><th>ಕ್ರ.ಸಂ</th><th>ಅಧಿಕಾರಿ/ಸಿಬ್ಬಂದಿ ಹೆಸರು</th></tr>
<tr><td>1</td><td>ಡಾ:ಸಿ ಚನ್ನಣ್ಣ- ನಿರ್ದೇಶಕರು</td></tr>
<tr><td>2</td><td>ಶ್ರೀ ಆನಂದಸಾಗರ ರೆಡ್ಡಿ, ಮುಖ್ಯ ಆಡಳಿತಾಧಿಕಾರಿ</td></tr>
<tr><td>3</td><td>ಡಾ:ಶಿವಕುಮಾರ್ ಶೆಟಕಾರ, ಹಿಂದಿನ ವೈದ್ಯ ಅಧೀಕ್ಷಕರು</td></tr>
<tr><td>4</td><td>ಶ್ರೀಮತಿ ಅನುಷಯಾ, ಸಹಾಯಕ ಆಡಳಿತಾಧಿಕಾರಿ</td></tr>
<tr><td>5</td><td>ಶ್ರೀ ಪ್ರಕಾಶ ಶರಣಪ್ಪಾ ಮಡಿವಾಳ ,ಕಛೇರಿ ಅಧೀಕ್ಷಕರು</td></tr>
<tr><td>6</td><td>ಶ್ರೀ ಬಾಬು ಕೋಟೆ- ಕಛೇರಿ ಅಧಿಕ್ಷಕರು</td></tr>
<tr><td>7</td><td>ಶ್ರೀ ಪ್ರಕಾಶ ಮಾಳಗೆ- ಪ್ರಥಮ ದರ್ಜೆ ಸಹಾಯಕರು</td></tr>
<tr><td>8</td><td>ಶ್ರೀಮತಿ ವರ್ಷಾ, ಪ್ರಥಮ ದರ್ಜೆ ಸಹಾಯಕರು</td></tr>
</table>
ಇದಕ್ಕೆ ಪ್ರತ್ಯುತ್ತರವಾಗಿ ಆರೋಪಿತ ಸಿಬ್ಬಂದಿಗಳು ಸಲ್ಲಿಸಿರುವ ಸಮಜಾಯಿಷಿಗಳನ್ನು ಪರಿಶೀಲಿಸಲಾಗುತ್ತಿದೆ. ಅಲ್ಲದೇ ವೈದ್ಯಕೀಯ ಶಿಕ್ಷಣ ಇಲಾಖೆಯ ಸಿಬ್ಬಂದಿಗಳನ್ನು ಹೊರತುಪಡಿಸಿ, ಇತರೆ ಇಲಾಖೆಯ ಅಧಿಕಾರಿ/ಸಿಬ್ಬಂದಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸದರಿಯವರುಗಳ ಮಾತೃ ಇಲಾಖೆಗಳಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮತ್ತು ಯೋಜನಾ ಇಲಾಖೆಯ ಸಹಮತಿ ಕೋರಿದ್ದು, ಸದರಿ ಇಲಾಖೆಯಿಂದ ಸಹಮತಿ ಸ್ವೀಕೃತವಾದ ನಂತರದಲ್ಲಿ ಇಲಾಖಾ ವಿಚಾರಣೆ ನಡೆಸುವ ಕುರಿತು ಕ್ರಮವಹಿಸಲಾಗುವುದು.</td>
</tr>
</table>

**ಕಡತ ಸಂ: ಎಂಇಡಿ 335 ಎಂ ಎಸ್ ಎಫ್ 2020**

**(ಡಾ: ಕೆ. ಸುಧಾಕರ್)**
**ವೈದ್ಯಕೀಯ ಶಿಕ್ಷಣ ಸಚಿವರು.**